ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಬುಧವಾರ, ದಿನಾಂಕ: 17ನೇ ಜುಲೈ, 2019

ಮಾರ್ಗಸೂಚಿ ದರಕ್ಕಿಂತ ಕಡಿಮೆ ದರಕ್ಕೆ ನೋಂದಣಿ ಮಾಡಿದ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) :-

252 (35) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) 2014-15ನೇ ಸಾಲಿನಲ್ಲಿ ಪ್ರಸ್ಟೇಜ್ ಟೆಕ್ ಪಾರ್ಕ್ 3 ಎಂಬ ಹೆಸರಿನಲ್ಲಿ ವರ್ತೂರು ಹೋಬಳಿಯ ಬೆಳ್ಳಂದೂರು ಖಾನೆ ಗ್ರಾಮದ ಸರ್ವೆ ಸಂಖ್ಯೆಗಳಾದ 110/1, 110/2, 110/3ರಲ್ಲಿ ನಿರ್ಮಿಸಿದ ವಾಣಿಜ್ಯ ಸಂಕೀರ್ಣದ ವಾಣಿಜ್ಯ ಬ್ಲಾಕುಗಳನ್ನು 135 ವಿವಿಧ ಗ್ರಾಹಕರುಗಳಿಗೆ ಸರ್ಕಾರವು ನಿಗದಿಪಡಿಸಿದ ಮಾರ್ಗಸೂಚಿ ದರಕ್ಕಿಂತ ಕಡಿಮೆ ದರದಲ್ಲಿ ಮಾರಾಟ ನೋಂದಣಿ ಮಾಡಿರುವ ತಪ್ಪಿತಸ್ಥ ಅಧಿಕಾರಿಯ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ ;' ಉದ್ದೇಶ ಪೂರ್ವಕವಾಗಿ ಸರ್ಕಾರಕ್ಕೆ ನಷ್ಟ ಉಂಟು ಮಾಡಿರುವ ಅಧಿಕಾರಿಯನ್ನು ಅಮಾನತ್ತುಗೊಳಿಸದಿರಲು ಕಾರಣವೇನು ;

(ಆ) ಉದ್ದೇಶ ಪೂರ್ವಕವಾಗಿ ರೂ. 103.5 ಕೋಟಿ ನಷ್ಟ ಉಂಟು ಮಾಡಿರುವ ಅಧಿಕಾರಿಯಿಂದಲೇ ಸದರಿ ಮೊತ್ತವನ್ನು ವಸೂಲು ಮಾಡಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ ;

(ಇ) ಸರ್ಕಾರವು ನಿಗದಿಪಡಿಸಿದ ಮಾರ್ಗಸೂಚಿ ದರಕ್ಕಿಂತ ಕಡಿಮೆ ದರದಲ್ಲಿ ಮಾರಾಟ ನೋಂದಣಿ ಮಾಡಿರುವುದು ಸಾಭೀತಾಗಿರುವುದರಿಂದ ಈ ನೋಂದಣಿಯನ್ನು ರದ್ದುಗೊಳಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ ;

(ಈ) ಸಂಬಂಧಿತ ಕಂಪನಿಯವರು ಕೊರತೆ ಶುಲ್ಕನವನ್ನು ಪಾವತಿಸಲು ಹೊರಡಿಸಿರುವ ಆದೇಶದ ವಿರುದ್ಧ ಮಾತ್ರವೇ ಅಫೀಲು ಮಾಡಿ ತಡೆಯಾಜ್ಞೆ ಪಡೆದುಕೊಂಡಿರುವುದರಿಂದ ಈ ಅಫೀಲು ಇತ್ಯರ್ಥವಾಗುವವರೆಗೆ ಮಾರಾಟ ನೋಂದಣಿಯನ್ನು ಅಮಾನತ್ತಿನಲ್ಲಿಡಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ ಮತ್ತು ಸದರಿ ಕಟ್ಟಡಗಳಿಗೆ ನೀರಿನ ಸಂಪರ್ಕ ಮತ್ತು ವಿದ್ಯುತ್ ಸಂಪರ್ಕ ಕಡಿತಗೊಳಿಸಲು ಕ್ರಮ ಕೈಗೊಳ್ಳಲಾಗಿದೆಯೇ ?